## ಕರ್ನಾಟಕ ವಿಧಾನ ಪರಿಷತ್

1). ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 878

2). ಸದಸ್ಯರ ಹೆಸರು : ಶ್ರೀ ಎಸ್.ರವಿ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)

3). ಉತ್ತರಿಸುವ ದಿನಾಂಕ : 12.03.2020

4). ಉತ್ತರಿಸುವ ಸಚಿವರು : ಸನ್ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಮಾನ್ಯ ಶಾಸಕರುಗಳಿಗೆ ಸ್ಥಳೀಯ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯ ಅನುದಾನವನ್ನು ವಾರ್ಷಿಕ ರೂ.200.00 ಲಕ್ಷಗಳನ್ನು ನಿಗದಿಪಡಿಸಿದ್ದು, ಈ ಪೈಕಿ ಈವರೆವಿಗೂ ಕೇವಲ ರೂ.50.00 ಲಕ್ಷಗಳನ್ನು ಮಾತ್ರ ಬಿಡುಗಡೆಗೊಳಿಸಲಾಗಿದ್ದು, ಈ ಹಣವು ಸಹ K-2 ಸಮಸ್ಯೆ ಯಿಂದ 2020ರ ಜನವರಿ ಅಂತ್ಯಕ್ಕೆ ಖಾತೆಗಳಿಗೆ ಜಮೆಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | 2019-20ನೇ ಸಾಲಿನಲ್ಲಿ 2 ಕಂತುಗಳಿಂದ ರೂ.299.67 ಕೋಟಿಗಳನ್ನು ಬಿಡುಗಡೆಗೊಳಿಸಲಾಗಿದೆ.<br>ಬಿಡುಗಡೆಯಾದ ಅನುದಾನದಲ್ಲಿ ಆಯಾ ಜಿಲ್ಲಾಧಿಕಾರಿಗಳು ಶೇಕಡ 75 ರಷ್ಟು ಖರ್ಚು ಭರಿಸಿ ಬೇಡಿಕೆ ಸಲ್ಲಿಸಿದಾಗ ಉಳಿದ ಅನುದಾನವನ್ನು ಬಿಡುಗಡೆಗೊಳಿಸಲಾಗುವುದು.<br><br>ಖಜಾನೆ-1 ರಲ್ಲಿನ ಎಲ್ಲಾ ಅನುದಾನವನ್ನು ಖಜಾನೆ-1 ರಿಂದ ಖಜಾನೆ-2ಕ್ಕೆ ವರ್ಗಾಯಿಸಲಾಗಿರುತ್ತದೆ. ಕೆ-ಲ್ಯಾಡ್ಸ್ ಯೋಜನೆಯಡಿಯಲ್ಲಿ ಬಿಡುಗಡೆಯಾದ ಅನುದಾನ ಮಾತ್ರ ಖಜಾನೆ-2ಕ್ಕೆ ವರ್ಗಾವಣೆಯಾಗಿರುವುದಿಲ್ಲ ಎಂದು ಯಾದಗಿರಿ ಜಿಲ್ಲೆಯಿಂದ ಮಾತ್ರ ವರದಿಯಾಗಿರುತ್ತದೆ. |
| (ಆ) | ಈಗಾಗಲೇ ಮಾರ್ಚ್ 2020ರ ಅಂತ್ಯಕ್ಕೆ ಸಮೀಪದಲ್ಲಿದ್ದರೂ, ಇನ್ನುಳಿದ ರೂ.150.00 ಲಕ್ಷಗಳನ್ನು ಬಿಡುಗಡೆಗೊಳಿಸದಿರುವುದಕ್ಕೆ ಕಾರಣಗಳೇನು; ಉಳಿಕೆ ಹಣ ಬಿಡುಗಡೆ ಮಾಡುವುದು ಯಾವಾಗ: | • ದಿನಾಂಕ:01.04.2019ಕ್ಕೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಗಳ ಪಿಡಿ ಖಾತೆಯಲ್ಲಿ ರೂ.10.50 ಕೋಟಿಗಳು ಉಳಿದಿರುತ್ತದೆ.<br>• ಪ್ರತಿ ವರ್ಷ ರೂ.2.00 ಕೋಟಿಗಳ ಮಿತಿಗೊಳಪಟ್ಟ ಕ್ರಿಯಾ ಯೋಜನೆಯನ್ನು ಪಡೆದು ಅನುಮೋದನೆ ನೀಡಿ ಅನುಷ್ಠಾನಗೊಳಿಸಲು ಸರ್ಕಾರದಿಂದ ನಿರ್ದೇಶನ ನೀಡಲಾಗಿರುತ್ತದೆ.<br>• ಜಿಲ್ಲಾಧಿಕಾರಿಗಳ ಪಿಡಿ ಖಾತೆಯಲ್ಲಿ ಇರುವ ಹಣದಲ್ಲಿ ಶೇ 75 ರಷ್ಟು ಖರ್ಚು ಭರಿಸಿದ ನಂತರ ಜಿಲ್ಲಾಧಿಕಾರಿಗಳು ಅನುದಾನಕ್ಕೆ ಬೇಡಿಕೆ ಸಲ್ಲಿಸಿದಲ್ಲಿ ಬಿಡುಗಡೆ ಮಾಡಲಾಗುವುದು. |
| (ಇ) | ಈ ಯೋಜನೆಯ ಕೆ.ಎಲ್.ಎಲ್.ಎ.ಡಿ ಅನುಷ್ಠಾನಗೊಳಿಸುವ ಪರಮಾಧಿಕಾರವು ಜಿಲ್ಲಾಧಿಕಾರಿಗಳಿಗೆ ಇದ್ದು, ಇದನ್ನು ಇತ್ತೀಚೆಗೆ ಉಪ ವಿಭಾಗಾಧಿಕಾರಿಗಳಿಗೆ | • ದಿನಾಂಕ:01.04.2019ಕ್ಕೆ ರೂ.948.97 ಕೋಟಿಗಳು ರಾಜ್ಯದ ಜಿಲ್ಲಾಧಿಕಾರಿಗಳ ಉಳಿತಾಯ ಖಾತೆಯಲ್ಲಿ ಹಣ ಲಭ್ಯವಿರುತ್ತದೆ.<br>• ಜಿಲ್ಲಾಧಿಕಾರಿಗಳಿಗೆ ಕೆಲಸದ ಒತ್ತಡಗಳು ಜಾಸ್ತಿ ಇರುವ |

| | | |
|---|---|---|
| | ಬದಲಾಯಿಸಲಾಗಿದ್ದು, ಈ ಬದಲಾವಣೆಯಿಂದ ಸರ್ಕಾರಕ್ಕೆ ಯಾವ ರೀತಿಯ ಅನುಕೂಲಗಳು ಆಗುತ್ತವೆ; ಇದರಿಂದ ಸರ್ಕಾರಕ್ಕೆ ಆಗುವ ಲಾಭಗಳೇನು;(ವಿವರ ನೀಡುವುದು) | ಕಾರಣ ಯೋಜನೆಯ ಅನುಷ್ಠಾನ ಮೇಲ್ವಿಚಾರಣೆ ಮಾಡಲು ಕಷ್ಟವಾಗುತ್ತಿರುವುದರಿಂದ, ಯೋಜನೆಯ ತ್ವರಿತ ಹಾಗೂ ನಿಗದಿತ ಅವಧಿಯೊಳಗೆ ಅನುಷ್ಠಾನಗೊಳಿಸುವ ಹಿತದೃಷ್ಟಿಯಿಂದ ಉಪ ವಿಭಾಗಾಧಿಕಾರಿಗಳು ಅವರುಗಳ ಉಪವಿಭಾಗಾಧಿಕಾರಿಗಳ ಮಟ್ಟದಲ್ಲಿ ಮೇಲ್ವಿಚಾರಣೆ ಮಾಡಲು ಅನುಕೂಲವಾಗುವುದು.<br>ಈ ಹಿನ್ನೆಲೆಯಲ್ಲಿ ಉಪ ವಿಭಾಗಾಧಿಕಾರಿಗಳಿಗೆ ಕೆಲಸದ ಹಂಚಿಕೆಯನ್ನು ಮಾಡಿದ್ದು, ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಅನುದಾನವನ್ನು ಸಮರ್ಪಕವಾಗಿ ಆಯಾ ವರ್ಷದಲ್ಲಿ ಬಳಕೆ ಮಾಡಿ ಸಾರ್ವಜನಿಕ ಉಪಯೋಗಕ್ಕೆ ಕಾಮಗಾರಿಗಳನ್ನು ಮುಕ್ತಗೊಳಿಸಲು ಅನುಕೂಲವಾಗುತ್ತದೆ ಎಂದು ಸರ್ಕಾರ ತೀರ್ಮಾನಿಸಿರುತ್ತದೆ. |
| (ಈ) | K-2 ಸಮಸ್ಯೆಯು ಸರ್ಕಾರದ ಗಮನಕ್ಕೆ ಬಂದಿದೆಯೇ? | ಯಾದಗಿರಿ ಜಿಲ್ಲೆಯ K-2 ಸಮಸ್ಯೆಯ ತಾಂತ್ರಿಕ ತೊಂದರೆಗಳನ್ನು ನಿವಾರಿಸಲಾಗಿದೆ. |

ಸಂಖ್ಯೆ: ಪಿಡಿಎಸ್ 16 ಕೆಎಲ್ಎಸ್ 2020

(ಬಿ.ಎಸ್.ಯಡಿಯೂರಪ್ಪ),
ಮುಖ್ಯಮಂತ್ರಿ